ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಖಾಸಗಿ ನಿವೇಶನಗಳಲ್ಲಿ ಬೆಳೆದಿರುವ ಮರಗಳನ್ನು ಮನೆ ನಿರ್ಮಾಣದ ಸಲುವಾಗಿ ತೆರವುಗೊಳಿಸುವ ಬಗ್ಗೆ

ಶ್ರೀಕೆ.ವಿ.ನಾರಾಯಣಸ್ವಾಮಿ(ವಿಧಾನಸಭೆಯಿಂದಚುನಾಯಿತರಾದವರು):-

279 (324) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ನಗರ ಪ್ರದೇಶದ ಖಾಸಗಿ ನಿವೇಶನಗಳಲ್ಲಿ ಬೆಳೆದಿರುವ ಮರಗಳನ್ನು ಮನೆ ನಿರ್ಮಿಸುವ ಸಲುವಾಗಿ ಕಡಿಯಲು ಅವಕಾಶವಿಲ್ಲವೇ ;

(ಆ) ಯಾವುದಾದರೂ ಕಾಯ್ದೆ ಅಥವಾ ಆದೇಶದಲ್ಲಿ ಖಾಸಗೀ ನಿವೇಶನಗಳಲ್ಲಿ ಬೆಳೆದಿರುವ ಮರಗಳನ್ನು ಮನೆ ನಿರ್ಮಿಸುವ ಸಲುವಾಗಿ ಕಡಿಯಬಾರದೆಂದು ತಿಳಿಸಲಾಗಿದೆಯೇ ; (ಆದೇಶದ ಪ್ರತಿಯನ್ನು ನೀಡುವುದು)

(ಇ) ಜೀವಮಾನದ ದುಡಿಮೆ ನೀಡಿ, ನಿವೇಶನ ಖರೀದಿಸಿ, ಮನೆ ನಿರ್ಮಿಸುವ ಸಲುವಾಗಿ ಖಾಸಗಿ ನಿವೇಶನದಲ್ಲಿ (ತನ್ನ ಸ್ವತಃ ಮರ ಕಡಿಯಲು ಅನುಮತಿ ನೀಡದಿದ್ದಲ್ಲಿ, ಅವರು ಮನೆ ನಿರ್ಮಿಸಿಕೊಂಡು ಬದಕುವ ಅವರ ಹಕ್ಕಿಗೆ ಅಡ್ಡಿಪಡಿಸಿದಂತೆ ಆಗುವುದಿಲ್ಲವೆ ;

(ಈ) ವಸತಿ ಉದ್ದೇಶಕ್ಕಾಗಿ ಖಾಸಗಿ (ಸ್ವಂತ) ನಿವೇಶನದಲ್ಲಿರುವ ಮರ ಕಡಿಯಲು ವಿನಾಯಿತಿಗಳು ಇವೆಯೇ ; ಇದ್ದಲ್ಲಿ, ಆದೇಶದ ಪ್ರತಿಯನ್ನು ನೀಡುವುದು ;

(ಉ) ವಿನಾಯಿತಿಗಳು ಇಲ್ಲದಿದ್ದಲ್ಲಿ, ವಿನಾಯಿತಿ ನೀಡಲು ಸರ್ಕಾರ ಉದ್ದೇಶಿಸಿದೆಯೇ ; ಯಾವ ಕಾಲಮಿತಿಯಲ್ಲಿ ವಿನಾಯಿತಿ ನೀಡಲಾಗುವುದು?